ನವಸಾಕ್ಷರ ಪುಸ್ತಕ ಮಾಲೆ ೭೪

# ಎರಡು ಪ್ರಸಂಗಗಳು

ಬಿ. ಎಸ್. ಭಾಸ್ಕರ್
ಎಂ. ಬಿ. ಆಶಾ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ – ೭೪

# ಎರಡು ಪ್ರಸಂಗಗಳು



ಬಿ.ಎಸ್.ಭಾಸ್ಕರ್

ಎಂ.ಬಿ.ಆಶಾ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ–೫೮೩ ೨೭೭



ERADU PRASANGAGALU : By B.S.Bhaskar & M.B.Asha. Published by The Director of Prasaranga, Kannada University, Hampi - 583 211, KARNATAKA.
First Impression 1994, Pp.ii + 26, Rs. 8.00.



**ಸಂಯೋಜನಾಧಿಕಾರಿ**
**ಡಾ.ಎಚ್.ಎಸ್.ಶ್ರೀಮತಿ**
**ಪಠ್ಯ ಪುಸ್ತಕ ರಚನಾ ವಿಭಾಗ**

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ — ೫೮೩ ೨೧೧

**ಮುಖಪುಟ ವಿನ್ಯಾಸ**
**ಕೆ.ಮಕಾಳಿ**

**ಬೆಲೆ : ರೂ. ೮.೦೦**

ಮುದ್ರಕರು
ವಿನಾಯಕ ಆಫ್‌ಸೆಟ್ ಪ್ರಿಂಟರ್ಸ್
8/1, ಮಾರೇನಹಳ್ಳಿ, 1ನೇ ಕ್ರಾಸ್, 23ನೇ ಮೇನ್,
ಜೆ. ಪಿ. ನಗರ, ಬೆಂಗಳೂರು-560 078.
ಫೋನ್: 642102



# ಎರಡು ಪ್ರಸಂಗಗಳು

## ೧. ಯಾರ ದೋಷ



ಇದು ಬರ್ಮ ದೇಶದ ಕಥೆ. ಬರ್ಮ ದೇಶ ನಮ್ಮ ನೆರೆಯ ದೇಶ. ಅಲ್ಲಿ ಒಬ್ಬ ರೈತನಿದ್ದ. ಅವನ ಹೆಸರು ಬೊಮ್ಮ. ಬೊಮ್ಮನ ಮನೆಯ ಬಳಿ ಒಂದು ತೆಂಗಿನ ಮರವಿತ್ತು. ಒಂದು ದಿನ ಬೊಮ್ಮ ಅದರ ಕೆಳಗೆ ಕುಳಿತಿದ್ದ. ಅಲ್ಲಿ ತನ್ನ ಕೊಡಲಿಯನ್ನು ಹರಿತಗೊಳಿಸುತ್ತಿದ್ದ. ಆಗ ಒಂದು ಬಸವನಹುಳು ತೆವಳುತ್ತಾ ಅವನ ಬಳಿ ಬಂದಿತು.



ಬಸವನ ಹುಳು ಅವನ ಕಾಲನ್ನು ಕಚ್ಚಿತು. ಬೊಮ್ಮನಿಗೆ ಕೋಪ ಬಂದಿತು. ಅವನು ತೆಂಗಿನ ಮರಕ್ಕೆ ಕೊಡಲಿಯಿಂದ ಹೊಡೆದನು. ತೆಂಗಿನ ಮರಕ್ಕೆ ಪೆಟ್ಟಾಯಿತು. ಮರಕ್ಕೆ ಕೋಪ ಬಂದು ತೆಂಗಿನ ಕಾಯನ್ನು ಕೆಳಕ್ಕೆ ಕೆಡವಿತು.



ಮರದ ಕೆಳಗೆ ಒಂದು ಹುಂಜ ನಿಂತಿತ್ತು. ಆ ತೆಂಗಿನಕಾಯಿ ಅದರ ಬೆನ್ನಿನ ಮೇಲೆ ಜೋರಾಗಿ ಬಿತ್ತು. ಹುಂಜ ಕೋಪಗೊಂಡಿತು. ಹತ್ತಿರವೇ ಇರುವೆಯ ಗೂಡಿತ್ತು. ಹುಂಜವು ಕೋಪಗೊಂಡು ಆ ಗೂಡನ್ನು ಕೆದರಿತು. ಇರುವೆಗಳು ಗಾಬರಿಗೊಂಡವು.



ಹತ್ತಿರದಲ್ಲಿ ಒಂದು ನಾಗರಹಾವು ಹೋಗುತ್ತಿತ್ತು. ಇರುವೆಗಳು ಕೋಪಗೊಂಡು ನಾಗರಹಾವಿಗೆ ಅಂಟಿಕೊಂಡವು. ಹಾವಿಗೆ ಕೋಪ ಬಂದಿತು. ಅದು ಒಂದು ಕಾಡುಹಂದಿಯನ್ನು ಕಚ್ಚಿತು. ಹಂದಿಗೆ ಬಹಳ ಕೋಪ ಬಂದಿತು. ಅದು ಒಂದು ದೊಡ್ಡ ಪೊದೆಯನ್ನು ಬೇರಿನೊಂದಿಗೆ ಕಿತ್ತೆಸೆಯಿತು.




ಆ ಪೊದೆಯ ಒಂದು ರೆಂಬೆಗೆ ಒಂದು ಬಾವಲಿ ನೇತಾಡುತ್ತಿತ್ತು. ಪೊದೆ ಕಿತ್ತಿದ್ದರಿಂದ ಬಾವಲಿ ನೆಲಕ್ಕೆ ಬಂದು ಬಿದ್ದಿತು. ಅದಕ್ಕೆ ಬಹಳ ಕೋಪ ಬಂದಿತು. ಕೋಪದಿಂದ ಅದು ಆನೆಯ ಕಿವಿಯಲ್ಲಿ ತೂರಿಕೊಂಡಿತು.



ಆನೆಗೆ ಕಸಿವಿಸಿಯಾಯಿತು. ಕೋಪಗೊಂಡ ಅದು ಬೆಟ್ಟದಿಂದ ಒಂದು ಬಂಡೆಯನ್ನು ನೂಕಿತು. ಬಂಡೆಯು ಉರುಳುತ್ತಾ ಕೆಳಕ್ಕೆ ಬಂದಿತು. ಕೆಳಗಡೆ ಒಬ್ಬ ಮುದುಕಿಯ ಮನೆಯಿತ್ತು. ಬಂಡೆಯು ಮನೆಯ ಸೂರಿನ ಮೇಲೆ ಬಿದ್ದಿತು.




ಮನೆಯು ಚೂರುಚೂರಾಯಿತು. ಮುದುಕಿಗೆ ಬಹಳ ಕೋಪ ಬಂದಿತು. ಅವಳು ಕೋಪದಿಂದ ಹೇಳಿದಳು. "ಬಂಡೆಯೇ ಬಂಡೆಯೇ ನೀನು ನನ್ನ ಮನೆಯನ್ನು ಕೆಡವಿದ್ದೀಯಾ ನೀನೇ ಬೆಲೆಯನ್ನು ಕೊಡಬೇಕಾಗಿದೆ." ಬಂಡೆ ಹೇಳಿತು: ಇಲ್ಲ, ನಾನೇಕೆ ಕೊಡಲಿ? ತಪ್ಪು ಆನೆಯದು. ಅದು ನನ್ನನ್ನು ಕೆಳಕ್ಕೆ ತಳ್ಳಿತು.



ಮುದುಕಿಯು ಆನೆಯ ಬಳಿಗೆ ಹೋಗಿ ಹೇಳಿದಳು. "ಆನೆಯೇ! ಆನೆಯೇ! ನೀನು ನನ್ನ ಮನೆಯ ಬೆಲೆಯನ್ನು ಕೊಡು." ಆನೆ ಹೇಳಿತು "ನಾನೇಕೆ ಕೊಡಲಿ? ತಪ್ಪು ಬಾವಲಿಯದು. ಅದು ನನ್ನ ಕಿವಿಯಲ್ಲಿ ತೂರಿತ್ತು."




ಮುದುಕಿ ಬಾವಲಿಯ ಹತ್ತಿರ ಹೋಗಿ ಹೇಳಿದಳು. "ಬಾವಲಿಯೇ, ಬಾವಲಿಯೇ ನೀನು ನನ್ನ ಮನೆಯ ಬೆಲೆಯನ್ನು ಕೊಡಬೇಕು." ಬಾವಲಿ ಹೇಳಿತು "ಇಲ್ಲ, ನಾನೇಕೆ ಕೊಡಲಿ? ತಪ್ಪು ಹಂದಿಯದು. ಅದು ಪೊದೆಯನ್ನು ಕಿತ್ತು ಹಾಕಿತು. ಇದರಿಂದಾಗಿ ನನಗೆ ಕೋಪ ಬಂದಿತು."



ಮುದುಕಿ ಹಂದಿಯ ಬಳಿ ಹೋಗಿ ಹೇಳಿದಳು. "ಹಂದಿಯೇ, ಹಂದಿಯೇ ನೀನು ನನ್ನ ಮನೆಯ ಬೆಲೆಯನ್ನು ಕೊಡಬೇಕು." ಹಂದಿ ಹೇಳಿತು ಇಲ್ಲಪ್ಪ, ನಾನೇಕೆ ಕೊಡಲಿ? ತಪ್ಪು ನಾಗರಹಾವಿನದು. ಅದು ನನ್ನನ್ನು ಕಚ್ಚಿತು."



ಮುದುಕಿಯು ಹಾವಿನ ಬಳಿ ಹೋಗಿ ಹೇಳಿದಳು "ಹಾವೇ! ಹಾವೇ! ನೀನೇ ನನ್ನ ಮನೆಯ ಬೆಲೆಯನ್ನು ಕೊಡಬೇಕು." ಹಾವು ಹೇಳಿತು "ಇಲ್ಲ, ನಾನೇಕೆ ಕೊಡಬೇಕು? ತಪ್ಪು ಇರುವೆಗಳದು. ಅವು ನನ್ನ ಬಾಲವನ್ನು ಕಚ್ಚಿದವು."



ಮುದುಕಿಯು ಇರುವೆಗಳ ಹತ್ತಿರ ಹೋಗಿ ಹೇಳಿದಳು. "ಇರುವೆಗಳೇ, ಇರುವೆಗಳೇ ನೀವು ನನ್ನ ಮನೆಯ ಬೆಲೆಯನ್ನು ಕೊಡಬೇಕು." ಇರುವೆಗಳು ಹೇಳಿದವು. "ತಪ್ಪು ಹುಂಜನದು. ಅದು ನಮ್ಮ ಮನೆಯನ್ನು ಹಾಳು ಮಾಡಿತು."



ಮುದುಕಿಯು ಹುಂಜನ ಬಳಿ ಹೋಗಿ ಹೇಳಿದಳು. "ಹುಂಜವೇ, ಹುಂಜವೇ ನೀನೇ ನನ್ನ ಮನೆಯ ಬೆಲೆಯನ್ನು ಕೊಡಬೇಕು." ಹುಂಜ ಹೇಳಿತು "ಇಲ್ಲ, ನಾನೇಕೆ ಕೊಡಲಿ? ತಪ್ಪು ತೆಂಗಿನ ಮರದ್ದು. ಅದು ನನ್ನ ಬೆನ್ನ ಮೇಲೆ ತೆಂಗಿನಕಾಯಿ ಕೆಡವಿತು."




ಮುದುಕಿಯು ತೆಂಗಿನಮರದ ಹತ್ತಿರ ಹೋಗಿ ಹೇಳಿದಳು "ತೆಂಗಿನಮರವೇ, ತೆಂಗಿನಮರವೇ ನೀನು ನನ್ನ ಮನೆಯ ಬೆಲೆಯನ್ನು ಕೊಡಬೇಕು." ತೆಂಗಿನಮರ ಹೇಳಿತು "ಇಲ್ಲ, ನಾನೇಕೆ ಕೊಡಲಿ? ತಪ್ಪು ಬೊಮ್ಮನದು. ಅವನೇ ನನ್ನ ಕಡೆಗೆ ಕೊಡಲಿ ಎಸೆದನು."



ಮುದುಕಿ ಬೊಮ್ಮನ ಬಳಿಗೆ ಬಂದು ಕೇಳಿದಳು. "ಬೊಮ್ಮನೇ, ಬೊಮ್ಮನೇ ನೀನೇ ನನ್ನ ಮನೆಯ ಬೆಲೆಯನ್ನು ಕೊಡಬೇಕು." ಬೊಮ್ಮ ಹೇಳಿದ "ಇಲ್ಲ, ನಾನೇಕೆ ಕೊಡಲಿ? ತಪ್ಪು ಬಸವನ ಹುಳುವಿನದು. ಅದೇ ನನ್ನ ಕಾಲನ್ನು ಕಚ್ಚಿದ್ದು."



ಮುದುಕಿ ಬಸವನ ಹುಳುವಿನ ಬಳಿ ಹೋಗಿ ಹೇಳಿದಳು. "ಬಸವನ ಹುಳವೇ, ಬಸವನ ಹುಳವೇ ನೀನೇ ನನ್ನ ಮನೆಯ ಬೆಲೆಯನ್ನು ಕೊಡಬೇಕು." ಆದರೆ ಈಗ ಬಸವನ ಹುಳು ಯಾರದು ತಪ್ಪೆಂದು ಹೇಳಲಾಗದೆ ಸುಮ್ಮನಿದ್ದಿತು. ಮುದುಕಿಯು ಅರಚಿ ಕೇಳುತ್ತಲೇ ಇದ್ದಳು. ಬಸವನ ಹುಳು ಮೌನವಾಗಿ ನೀರಿನೊಳಕ್ಕೆ ಧುಮುಕಿತು. ನೋಡುನೋಡುತ್ತಿರುವಂತೆಯೇ ತಳ ಸೇರಿತು. ಅಂದಿನಿಂದಲೂ ಅದರ ಹುಡುಕಾಟ ನಡೆದೇ ಇದೆ. ಆದರೆ ಅದು ನಾಚಿಕೆಯಿಂದ ಮುಖಮುಚ್ಚಿಕೊಂಡು ತಿರುಗುತ್ತಿದೆ. ಬಹಳ ಜನರು ತಮ್ಮ ತಪ್ಪುಗಳನ್ನು ಇನ್ನೊಬ್ಬರ ಮೇಲೆ ಹಾಕುತ್ತಾರೆ. ಅವರಿಗೂ ಈ ಬಸವನಹುಳುವಿನಂತೆ ನಾಚಿಕೆಯಾದರೂ ಆಗಲಿ.

# ೨. ಯಾರು ಮೇಲು



ಅದೊಂದು ಊರು. ಅಲ್ಲೊಬ್ಬ ಕಲ್ಲುಕುಟ್ಟಿಗ. ದೊಡ್ಡ ದೊಡ್ಡ ಬಂಡೆಗಳಿಂದಾದ ಗುಡ್ಡದ ಬುಡ ಕುಟ್ಟುವುದೇ ಅವನ ಕೆಲಸ. ದೊಡ್ಡ ಬಂಡೆಗಳನ್ನು ಕುಟ್ಟಿ ಕುಟ್ಟಿ ಸಣ್ಣ ಸಣ್ಣ ಕಲ್ಲುಗಳನ್ನಾಗಿ ಮಾಡಿ, ಮನೆಮಾರು ಕಟ್ಟಲು ಬರುವಂತೆ ಮಾಡಿ ಕೊಡುತ್ತಿದ್ದ. ದಿನಾ ಬೆಳಗೆದ್ದು ಗುಡ್ಡದ ಬುಡಕ್ಕೆ ಹೋದರೆ, ಅವ ಮನೆಗೆ ಬರುತ್ತಿದ್ದುದು ಹೊತ್ತು ಮುಳುಗುವ ಹೊತ್ತಿಗೆ. ಅವನಿಗೆ ಬರುತ್ತಿದ್ದುದು ಅದೊಂದೇ ಕೆಲಸ. ಅದನ್ನೇ ಖುಷಿಯೋ, ಬೇಸರವೋ ಮಾಡುತ್ತಿದ್ದ.



ಒಂದು ಮುಂಜಾನೆ ಕಲ್ಲುಕುಟ್ಟಿಗ ಗುಡ್ಡ ಕಡಿಯಲು ಹೊರಟ. ಅವ ರಾಜಬೀದಿಯನ್ನು ಹಾದೇ ಊರ ಹೊರಗೆ ಹೋಗಬೇಕಾಗಿತ್ತು. ಹಾಗೆಯೇ ಹೊರಟಿದ್ದ. ಅವನಿಗೆ ಯಾರೋ ಕೂಗುವುದು ಕೇಳಿಸಿತು. "ತಲೆಬಾಗಿ ನಮಸ್ಕರಿಸಿ, ತಲೆಬಾಗಿ ನಮಸ್ಕರಿಸಿ ಮಹಾರಾಜರ ಸವಾರಿ ಬರುತ್ತಿದೆ, ತಲೆಬಾಗಿ ನಮಸ್ಕರಿಸಿ" ಕಲ್ಲುಕುಟ್ಟಿಗ ನೋಡಿದ. ಆನೆಯ ಮೇಲೆ ಅಂಬಾರಿ, ಅದರೊಳಗೆ ಮಹಾರಾಜ ಕುಳಿತಿದ್ದಾನೆ. ಆನೆ ನಿಧಾನವಾಗಿ ಹೆಜ್ಜೆ ಇಡುತ್ತಾ ಬರುತ್ತಿದೆ. ಅದರ ಮೇಲೆ ಮಾವುತ ಕುಳಿತಿದ್ದಾನೆ. ಅವನ ಕೈಯಲ್ಲೊಂದು ಚಬೂಕು. ಬೀದಿಯಲ್ಲಿ ಓಡಾಡುತ್ತಿದ್ದವರೆಲ್ಲರೂ, ತಲೆಬಾಗಿ ನಮಸ್ಕರಿಸುತ್ತಿದ್ದರು. ಆನೆ ಕಲ್ಲುಕುಟ್ಟಿಗನ ಸಮೀಪ ಬರಲು, ಅವನೂ ತಲೆಬಾಗಿ ನಮಸ್ಕರಿಸಿದ. ತಲೆಯನ್ನು ಬಾಗಿಸಿದ್ದಾಗ, ಆನೆಯ ದೊಡ್ಡ ದೊಡ್ಡ ಕಾಲುಗಳು ಅವನಿಗೆ ಕಾಣಿಸಿದವು. "ಹಾಗಾದರೆ ತಾನು ಆನೆಗೇ ತಲೆಬಾಗಿದೆನೇ? ತನ್ನನ್ನು ಮಹಾರಾಜರಂತೂ ಕಂಡಿರಲಾರರು." ಕಲ್ಲುಕುಟ್ಟಿಗ ಯೋಚಿಸಿದ. "ಎಲಾ, ಆನೆಯ ಅದೃಷ್ಟವೇ, ಎಲ್ಲರೂ ಅದಕ್ಕೆ ತಲೆಬಾಗಿ ನಮಸ್ಕರಿಸುವರು. ಛೇ! ನಾನೂ ಈ ಹಾಳು ಕಲ್ಲುಕುಟ್ಟಿಗನಾಗದೇ, ಆನೆಯಾಗಿದ್ದಿದ್ದರೆ, ಎಲ್ಲರೂ ನನಗೇ ನಮಸ್ಕಾರ ಮಾಡುತ್ತಿದ್ದರು."




ಕೂಡಲೇ ಅಲ್ಲೊಂದು ಪ್ರಕಾಶಮಾನವಾದ ಬೆಳಕು ಮಿಂಚಿ ಮರೆಯಾಯಿತು! ಕಲ್ಲುಕುಟ್ಟಿಗ ರಾಜನ ಆನೆಯಾಗಿದ್ದ! ಅವನ ಬೆನ್ನ ಮೇಲೆ ಅಂಬಾರಿ ಇತ್ತು. ಒಳಗೆ ರಾಜ ಕುಳಿತಿದ್ದ. ಅವನ ಕುತ್ತಿಗೆಯ ಮೇಲೆ ಮಾವುತ ಕುಳಿತಿದ್ದ. ಅವನ ಕೈಯಲ್ಲಿ ಚಬೂಕು ಇತ್ತು. ಕಲ್ಲುಕುಟ್ಟಿಗ ಮೆಲ್ಲಗೆ ನಡೆಯುತ್ತಿದ್ದ. ಬೀದಿಯ ಜನರೆಲ್ಲ "ತಲೆಬಾಗಿ ನಮಸ್ಕರಿಸುತ್ತಿದ್ದರು." ಕಲ್ಲುಕುಟ್ಟಿಗ ಖುಷಿಯಾಗಿದ್ದ. ಅಷ್ಟರಲ್ಲಿಯೇ ಮಾವುತ ತನ್ನ ಚಬೂಕಿನಿಂದ ಕಲ್ಲುಕುಟ್ಟಿಗನ ತಲೆಯನ್ನು ತಿವಿದ. ಕಲ್ಲುಕುಟ್ಟಿಗನಿಗೆ ನೋವಾಯಿತು. ಮಾವುತ ಮತ್ತೆ ಮತ್ತೆ ತಿವಿದ. ಆಗ ಕಲ್ಲುಕುಟ್ಟಿಗನಿಗೆ ಎನಿಸಿತು "ಎಲಾ ಮಾವುತನೇ! ನಾನು ಇಷ್ಟು ದೊಡ್ಡಕ್ಕಿದ್ದರೂ, ನನ್ನನ್ನೇ ತಿವಿದು, ನೋಯಿಸುತ್ತಾನಲ್ಲ. ಆನೆಯಾಗಿದ್ದರೂ ಏನೂ ಮಾಡಲಾರೆನಲ್ಲ. ಛೇ! ಈ ಆನೆಯಾಗಿರುವುದರ ಬದಲು ಮಾವುತನಾಗಿದ್ದರೆ."



ಪ್ರಕಾಶಮಾನವಾದ ಬೆಳಕು ಮತ್ತೊಮ್ಮೆ ಮಿಂಚಿ ಮರೆಯಾಯಿತು. ಕಲ್ಲುಕುಟ್ಟಿಗ ಮಾವುತನಾಗಿದ್ದ. ಅವನ ಕೈಯಲ್ಲಿ ಚಬೂಕು ಇತ್ತು. ಅವ ಆನೆಯನ್ನು ತಿವಿದ. ಆನೆ ಓಡಲು ತೊಡಗಿತು. ಆನೆಯ ಓಟಕ್ಕೆ ಮಹಾರಾಜನ ಅಂಬಾರಿ ಅಲುಗಿತು. ರಾಜ ಆಯತಪ್ಪಿ ಬೀಳುವುದರಲ್ಲಿದ್ದ. ಕಲ್ಲುಕುಟ್ಟಿಗ ಆನೆಯನ್ನು ಮತ್ತೆ ತಿವಿದ. ಆನೆ ನಿಂತಿತು. ಮಹಾರಾಜ ಬೀಳುವುದು ತಪ್ಪಿತು. ರಾಜನಿಗೆ ತುಂಬಾ ಕೋಪ ಬಂತು. ಅವ ಕಲ್ಲುಕುಟ್ಟಿಗನನ್ನು ಕಾಲಿನಿಂದ ಒದ್ದ. ಆಗ ಕಲ್ಲುಕುಟ್ಟಿಗನಿಗೆ ವೇದನೆಯಾಯಿತು. "ಛೇ! ಎಂಥ ಹಾಳು ಜನ್ಮ ಮಾವುತನದು. ರಾಜನ ಒದೆ ತಿನ್ನಬೇಕು. ನಾನು ರಾಜನೇ ಆಗಿದ್ದಿದ್ದರೆ!" ಎಂದು ಯೋಚಿಸಿದ.




ಪ್ರಕಾಶಮಾನವಾದ ಬೆಳಕು ಮಿಂಚಿ ಮರೆಯಾಯಿತು. ಕಲ್ಲುಕುಟ್ಟಿಗ ಅಂಬಾರಿಯೊಳಗಿದ್ದ. ಅವ ಮಹಾರಾಜನಾಗಿದ್ದ. ಅವನ ಕೈಯಲ್ಲಿ ಹಣ್ಣಿನ ರಸದ ಬಟ್ಟಲಿತ್ತು. ಆನೆ ಮೆಲ್ಲನೆ ನಡೆಯುತ್ತಿತ್ತು. ಕಲ್ಲುಕುಟ್ಟಿಗ ರಸವನ್ನು ಮೆಲ್ಲನೆ ಹೀರುತ್ತಿದ್ದ. ಆಗ ಸೂರ್ಯ ಮೇಲಕ್ಕೇರುತ್ತಿದ್ದ. ಸೂರ್ಯನ ಬೆಳಕು ಕಲ್ಲುಕುಟ್ಟಿಗನ ಕಣ್ಣನ್ನು ಕುಕ್ಕುತ್ತಿತ್ತು. ಅವನಿಗೆ ಕಿರಿಕಿರಿಯಾಗುತ್ತಿತ್ತು. ಸೂರ್ಯ ಏರುತ್ತಿದ್ದಂತೆ, ಅವನಿಗೆ ವಿಪರೀತ ಶಾಖ ತಟ್ಟುತ್ತಿತ್ತು."ಅಯ್ಯೋ, ಇದೇನಿದು! ಸೂರ್ಯನ ಕಿರಣ ಕಣ್ಣನ್ನು ಕುಕ್ಕುತ್ತಿದೆ. ಸೂರ್ಯನಿಗೆ ಎಷ್ಟು ಶಕ್ತಿ ಇದೆ. ಮಹಾರಾಜನಾದರೂ ನನ್ನ ಕಣ್ಣನ್ನು ಕುಕ್ಕುತ್ತಾನೆ. ನಾನು ಸೂರ್ಯನಾಗಿದ್ದಿದ್ದರೆ." ಪ್ರಕಾಶಮಾನವಾದ ಬೆಳಕು ಮಿಂಚಿ ಮರೆಯಾಗಿತ್ತು. ಕಲ್ಲುಕುಟ್ಟಿಗ ಸೂರ್ಯನಾಗಿದ್ದ. ರಾಜನ ಅಂಬಾರಿ ಸಾಗಿತ್ತು. ರಾಜ ಮುಖಕ್ಕೆ ಕೈ ಅಡ್ಡ ಹಿಡಿದಿದ್ದ. ಕಲ್ಲುಕುಟ್ಟಿಗ ರಾಜನ ಕಣ್ಣು ಕುಕ್ಕುತ್ತಿದ್ದ.




ಸ್ವಲ್ಪ ಸಮಯಕ್ಕೆ ವಾತಾವರಣ ಮಂಕಾಯಿತು. ಮೋಡಗಳು ತೇಲತೊಡಗಿದವು. ಅವು ಸೂರ್ಯನನ್ನು ಮರೆಮಾಡಿದವು. ಕರಿ ಬಿಳಿ ಮೋಡಗಳ ಮರೆಯಲ್ಲಿ ಕಲ್ಲುಕುಟ್ಟಿಗನಿಗೆ ಬೇಸರವಾಯಿತು. "ಏನು! ಸೂರ್ಯನನ್ನು ಮೋಡ ಮರೆ ಮಾಡುವುದೇ? ಹಾಗಾದರೆ ಸೂರ್ಯನಿಗಿಂತ ಮೋಡ ಮಿಗಿಲೇ! ನಾನೂ ಮೋಡವಾಗಿದ್ದರೆ" ಯೋಚಿಸಿದ ಕಲ್ಲುಕುಟ್ಟಿಗ. ಬೆಳಕು ಮಿಂಚಿ ಮರೆಯಾಗುತ್ತಿದ್ದಂತೆ, ಕಲ್ಲುಕುಟ್ಟಿಗ ಮೋಡವಾದ. ಅವ ಸೂರ್ಯನನ್ನು ಮರೆಮಾಡಿದ. ಸೂರ್ಯ ಇವನ ಹಿಂದೆ ಪೂರ್ತಿ ಕಾಣದಾದ. ಅಷ್ಟರಲ್ಲೇ ಸುಂಯ್ ಎಂದು ಗಾಳಿ ಬೀಸಿತು. ಅದು ಮೋಡವನ್ನು ಚದುರಿಸಿತು. ಅದನ್ನು ಎಲ್ಲೆಲ್ಲಿಗೋ ಒಯ್ದು ಹಾಕಿತು. ಕಲ್ಲುಕುಟ್ಟಿಗ ದಿಕ್ಕು ದೆಸೆಯಿಲ್ಲದೆ, ಹಾರಿ ಹೋದ. ಅವನಿಗೆ ಜಿಗುಪ್ಸೆ ಬಂತು. "ಇದೆಂಥಾ ಬಾಳು ಮೋಡದ್ದು? ಗಾಳಿ ಬಂದರೆ ಚದುರುತ್ತದೆ. ಅಬ್ಬಾ, ಗಾಳಿಯ ಬಲವೇ! ಹೇಗೆ ನುಗ್ಗುತ್ತದೆ. ನಾನೂ ಗಾಳಿಯಾಗಿದ್ದರೆ ಚೆನ್ನಾಗಿತ್ತು."




ಅವ ಗಾಳಿಯಾಗಿದ್ದ. ಬೆಳಕು ಮಿಂಚಿ ಮರೆಯಾಗಿತ್ತು. ಗಾಳಿ ಮೋಡವನ್ನು ಚದುರಿಸಿತು. ತರಗೆಲೆಗಳನ್ನು ಉದುರಿಸಿತು. ಧೂಳನ್ನು ಎಬ್ಬಿಸಿತ್ತು. ತನ್ನ ಮನಸ್ಸಿಗೆ ಬಂದಂತೆ ಗಾಳಿಯಾಗಿದ್ದ ಕಲ್ಲುಕುಟ್ಟಿಗ ಬೀಸಿದ್ದ. ರಭಸವಾಗಿ ಬೀಸಿದ. ಸೀದ ಹೋಗಿ ದೊಡ್ಡದಾದ ಕಲ್ಲು ಬಂಡೆಗಳಿಂದಾದ ಒಂದು ಎತ್ತರವಾದ ಬೆಟ್ಟಕ್ಕೆ ಅಪ್ಪಳಿಸಿದ. ಅವನಿಗೆ ಬಹಳ ಪೆಟ್ಟಾಯಿತು. ನೋವಾಯಿತು. ಅವ ಯೋಚಿಸಿದ "ಗಾಳಿಯಾದರೆ ಲಂಗು ಲಗಾಮಿಲ್ಲ. ರಭಸವನ್ನು ತಡೆದುಕೊಳ್ಳಲೇ ಆಗುತ್ತಿಲ್ಲ. ಬೆಟ್ಟವೆಷ್ಟು ಗಟ್ಟಿ! ನನಗೆಷ್ಟು ನೋವಾಯಿತು! ಅದೆಷ್ಟು ಅಚಲವಾಗಿತ್ತು. ನಾನೂ ಬೆಟ್ಟವಾಗಿದ್ದರೆ, ಎಷ್ಟು ಚೆನ್ನ."




ಪ್ರಕಾಶಮಾನವಾದ ಬೆಳಕು ಮಿಂಚಿ ಮರೆಯಾಯಿತು. ಕಲ್ಲುಕುಟ್ಟಿಗ ಬೆಟ್ಟವಾದ. ಅವ ತುಂಬಾ ಖುಷಿಯಾಗಿದ್ದ. ತುಂಬಾ ಗಟ್ಟಿಯಾಗಿದ್ದ. ಗಾಳಿ ಯಾವ ರಭಸದಿಂದ ಬಂದರೂ ಅವ ಅಲುಗಾಡುತ್ತಿರಲಿಲ್ಲ. ದೃಢವಾಗಿದ್ದ. ಅವನಿಗೆ ತುಂಬಾ ಖುಷಿಯಾಗಿತ್ತು. ಹಾಗೆಯೇ ಅವನಿಗೆ ಕಲ್ಲು ಒಡೆಯುವ ಸದ್ದು ಕೇಳಿಸಿತು. ತನ್ನ ಬುಡವನ್ನಾರೋ ಕುಟ್ಟುತ್ತಿರುವಂತೆ ಭಾಸವಾಯಿತು. ನೋವಾಗತೊಡಗಿತು. ನೋಡುತ್ತಾನೆ. ಅಲ್ಲೊಬ್ಬ ಕಲ್ಲು ಕುಟ್ಟಿಗ. ತನ್ನ ಬುಡದಲ್ಲಿ ನಿಂತು, ತನ್ನನ್ನು ಕುಟ್ಟುತ್ತಿದ್ದಾನೆ. ಪುಡಿ ಮಾಡುತ್ತಿದ್ದಾನೆ. "ಛೇ! ನಾನ್ಯಾಕಾದರೂ ಈ ಬೆಟ್ಟವಾಗುವ ಆಸೆ ಪಟ್ಟೆನೋ. ನಾನು ನಾನಾಗಿದ್ದರೇ ಚೆನ್ನಿತ್ತು. ನಾನು ಪುನಃ ಕಲ್ಲುಕುಟ್ಟಿಗನೇ ಆಗುವಂತಿದ್ದರೆ" ಎಂದು ಯೋಚಿಸುತ್ತಿದ್ದಂತೆ ಬೆಳಕು ಮಿಂಚಿ ಮರೆಯಾಗಿತ್ತು.



ಅವ ಕಲ್ಲುಕುಟ್ಟಿಗನಾಗಿದ್ದ. ದೊಡ್ಡ ಬೆಟ್ಟದ ಕೆಳಗೆ ನಿಂತು ಕಲ್ಲು ಬಂಡೆಯನ್ನು ಒಡೆಯುತ್ತಿದ್ದ. ಸಣ್ಣ ಸಣ್ಣ ಕಲ್ಲುಗಳನ್ನಾಗಿ ಕುಟ್ಟುತ್ತಿದ್ದ.

ಅವನಿಗೆ ಕೂಗು ಕೇಳಿಸಿತು. "ತಲೆಬಾಗಿ ನಮಸ್ಕರಿಸಿ, ತಲೆಬಾಗಿ ನಮಸ್ಕರಿಸಿ, ಮಹಾರಾಜರ ಸವಾರಿ ಬರುತ್ತಿದೆ. ತಲೆಬಾಗಿ ನಮಸ್ಕರಿಸಿ" ಕಲ್ಲುಕುಟ್ಟಿಗ ನೋಡಿದ. ಮಹಾರಾಜನ ಆನೆ, ಮೇಲೆ ಅಂಬಾರಿ, ಅದರೊಳಗೆ ಮಹಾರಾಜ, ಮುಂದೆ ಮಾವುತ. ಅವನ ಕೈಯಲ್ಲಿ ಚಬೂಕು. ರಾಜ ಊರ ಹೊರಗಿನ ಕೊಳಕ್ಕೆ ಜಲಕ್ರೀಡೆಗೆ, ಹೊರಟಂತಿತ್ತು. ಬೀದಿಯ ಜನರೆಲ್ಲ ತಲೆಬಾಗಿ ನಮಸ್ಕರಿಸುತ್ತಿದ್ದರು. ಆನೆ ಕಲ್ಲುಕುಟ್ಟಿಗನ ಬಳಿ ಬಂತು. ಅವ ತಲೆಬಾಗಿದ. ಆನೆಯ ದೊಡ್ಡ ದೊಡ್ಡ ಕಾಲುಗಳನ್ನು ನೋಡಿದ. ಹಾಗೆಯೇ ನಮಸ್ಕರಿಸಿ ಮೇಲೆದ್ದ. ಆನೆ ಮುಂದೆ ಸಾಗಿತು. ಅವ ಆನೆಯ ಕಡೆ ನೋಡಿದ. ಒಂದು ಕ್ಷಣ. ಕೈಯಲ್ಲಿದ್ದ ಸುತ್ತಿಗೆ ಎತ್ತಿಕೊಂಡು ಬೆಟ್ಟದ ಬುಡಕ್ಕೆ ಹೋದ. ಟಕ, ಟಕ ಸದ್ದಾಗುತ್ತಿತ್ತು. ಕಲ್ಲುಕುಟ್ಟಿಗ ಬಂಡೆ ಒಡೆಯುತ್ತಿದ್ದ. ಸಣ್ಣ ಸಣ್ಣ ಕಲ್ಲುಗಳನ್ನಾಗಿ ಕುಟ್ಟುತ್ತಿದ್ದ.

***

ಕನ್ನಡ ವಿಶ್ವವಿದ್ಯಾ ಟ್ಟದವರೆಗೆ ಉತ್ತಮ
ಹಾಗೂ ಉಪಯ ಠ್ಯಪುಸ್ತಕ ರಚನಾ
ವಿಭಾಗ'ವನ್ನು ತ ಠ್ಯಪುಸ್ತಕ ರಚನೆ
ಮಾಡಬೇಕೆಂದು ನವಸಾಕ್ಷರರಿಗಾಗಿ
ಪುಸ್ತಕ ಬರೆಸುವ ವಹಿಸಿಕೊಟ್ಟರು.
ವಿಶ್ವವಿದ್ಯಾಲಯವ ಖ್ಯಾತ ಲೇಖಕರನ್ನು,
ಭಾಷಾತಜ್ಞರನ್ನು, ಲ್ಲರ ಅಭಿಪ್ರಾಯ,
ಸಲಹೆ, ಸಹಕಾರಗ ಮುದ್ರಣ ವಿನ್ಯಾಸ,
ಚಿತ್ರಗಳ ಮಹತ್ವ ೇಕ ಸಲ ಚರ್ಚಿಸಿ
ಯೋಜನೆಯನ್ನು

ನವಸಾಕ್ಷರರಿಗಾಗಿ ಪ್ರಕಟವಾಗಿರುವ
ಪುಸ್ತಕಗಳನ್ನೆಲ್ಲ ಭಾಷಾತಜ್ಞರಿಂದ
ಪರಿಶೀಲಿಸಲಾಯಿ ಕೊಂಡು ಅವರಿಗೆ
ಕಮ್ಮಟಗಳನ್ನು ಆಯ್ದ ಜಿಲ್ಲೆ,
ತಾಲೂಕುಗಳಿಗೆ ವವರಿಂದ ಅದರ
ಗುಣದೋಷಗಳ ವಿಶ್ವವಿದ್ಯಾಲಯದ
ಗಣಕಯಂತ್ರದಲ್ಲಿ ಯಕರು ನೀಡಿದ್ದ
ಮಾಹಿತಿಗಳನ್ನೆಲ್ಲ ವಾಗಿ ವಿಷಯದ
ಆದ್ಯತೆಗಳನ್ನು ನಿ ಲೇಖಕರು ನಮ್ಮ
ವಿಶ್ವವಿದ್ಯಾಲಯದ ಪ್ರಾಧ್ಯಾಪಕರ ಜೊತೆ ಚರ್ಚಿಸಿ ತಮ್ಮ ಹಸ್ತಪ್ರತಿಗಳಿಗೆ ಅಂತಿಮ ರೂಪ ಕೊಟ್ಟರು. ಕಲಾವಿದರು ವಿಷಯಗಳಿಗೊಪ್ಪುವ ಚಿತ್ರಗಳನ್ನು ಬರೆದುಕೊಟ್ಟರು. ಹೀಗೆ ಸಿದ್ಧಗೊಂಡ ಹಸ್ತಪ್ರತಿಗಳನ್ನು ನವಸಾಕ್ಷರರ ಬಳಿ ಕೊಂಡೊಯ್ದು ಅವರ ಮುಂದೆ ಪಠಿಸಿ ನಂತರ ಅವರ ಅಭಿಪ್ರಾಯ, ಪ್ರತಿಕ್ರಿಯೆಗಳನ್ನು ಅಳವಡಿಸಿ ಹಸ್ತಪ್ರತಿಯನ್ನು ಅಂತಿಮಗೊಳಿಸಲಾಯಿತು.

ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು